# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 404(568) |
| ಸದಸ್ಯರ ಹೆಸರು | : | ಶ್ರೀ ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 21/02/2022 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪದವಿ ಪೂರ್ವ ಶಿಕ್ಷಣದ ವೃತ್ತಿ ಶಿಕ್ಷಣದ (ಜೆ.ಓ.ಸಿ) ಕೋರ್ಸ್‌ಗಳನ್ನು ಯಾವಾಗ ರದ್ದುಗೊಳಿಸಲಾಯಿತು; ಅಲ್ಲಿದ್ದ ಸಿಬ್ಬಂದಿಗಳ ಸಂಖ್ಯೆ ಎಷ್ಟು; | 2010-11ನೇ ಸಾಲಿನಲ್ಲಿ ಸರ್ಕಾರದ ಸುತ್ತೋಲೆ ಸಂಖ್ಯೆ:ಇಡಿ 29 ಟಿವಿಇ 2010, ದಿನಾಂಕ:07.05.2010ರಂತೆ ವೃತ್ತಿ ಶಿಕ್ಷಣ ಕೋರ್ಸುಗಳನ್ನು ರದ್ದುಪಡಿಸಲಾಯಿತು. ವೃತಿ ಶಿಕ್ಷಣ ಕೋರ್ಸುಗಳನ್ನು ಮುಚ್ಚಿದಾಗ ವೃತ್ತಿ ಶಿಕ್ಷಣ ಇಲಾಖೆಯಲ್ಲಿ ಒಟ್ಟು 3746 ಅರೆಕಾಲಿಕ ಬೋಧಕ / ಬೋಧಕೇತರ ಸಿಬ್ಬಂದಿಗಳು ಕಾರ್ಯನಿರ್ವಹಿಸುತ್ತಿದ್ದರು.<br><br>ಸರ್ಕಾರಿ - 1524<br>ಅನುದಾನಿತ - 2110<br>ಅನುದಾನ ರಹಿತ - 112<br>ಒಟ್ಟು = 3746 |
| ಆ) | ಈ ಸಿಬ್ಬಂದಿಗಳನ್ನು ಯಾವಾಗ ಸರ್ಕಾರ ವಿವಿಧ ಇಲಾಖೆಗಳಲ್ಲಿ ವಿಲೀನಗೊಳಿಸಿತು; (ವಿವರ | ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ಅಧಿನಿಯಮ, 2011ರ ಅಧಿಸೂಚನೆ ಸಂಖ್ಯೆ:ಸಂವ್ಯಶಾಇ 22 ಶಾಸನ 2011, |

| | | |
|---|---|---|
| | ನೀಡುವುದು) | ದಿನಾಂಕ:06.4.2011ಕ್ಕೆ ವಿಲೀನಕ್ಕೆ ಅರ್ಹರಿದ್ದ 2931 ವೃತ್ತಿ ಶಿಕ್ಷಣ ಸಿಬ್ಬಂದಿಯವರನ್ನು 2012 ರಿಂದ 2018ರ ಅವಧಿಯಲ್ಲಿ ವಿವಿಧ ಇಲಾಖೆಗಳಲ್ಲಿ ವಿಲೀನಗೊಳಿಸಲಾಯಿತು. |
| ಇ). | 5 ವರ್ಷಗಳಿಗಿಂತ ಕಡಿಮೆ ಸೇವೆ ಸಲ್ಲಿಸಿದ ಸಿಬ್ಬಂದಿಗಳು ಈ ವಿಲೀನ ಪ್ರಕ್ರಿಯೆಯಿಂದ ಹೊರ ಉಳಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ. |
| ಈ) | ಹಾಗಿದ್ದಲ್ಲಿ, ಸರ್ಕಾರವು ಕಾನೂನು ರಚಿಸಿ 5 ವರ್ಷಗಳಿಗಿಂತ ಕಡಿಮೆ ಸೇವೆ ಸಲ್ಲಿಸಿರುವ ಜೆ.ಓ.ಸಿ ಸಿಬ್ಬಂದಿಗಳನ್ನು ಸಹ ವಿಲೀನಗೊಳಿಸಲು ಕ್ರಮ ಕೈಗೊಳ್ಳುವುದೆ: (ವಿವರ ನೀಡುವುದು) | ಜೆ.ಓ.ಸಿ. ವಿಲೀನ ವಿಧೇಯಕ ದಿನಾಂಕ:06.04.2011ರ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 22 ಶಾಸನ 2011ರಲ್ಲಿನ ನಿಯಮ 3(1)(ಎ)ರಲ್ಲಿ ಯಾವೊಬ್ಬ, ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನನ್ನು ಆತನಿಗೆ ನೇರವಾಗಿ ಅನ್ವಯಿಸಬಹುದಾದಂಥ ಕಾರಣಗಳಿಗಾಗಿ ಆತನು ಯಾವುದೇ ಸೇವಾಭಂಗವಿಲ್ಲದೆ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ನಿರಂತರವಾಗಿ ಕರ್ತವ್ಯ ನಿರ್ವಹಿಸಿದ್ದ ಹೊರತು ವಿಲೀನಗೊಳಿಸತಕ್ಕದ್ದಲ್ಲ ಎಂದು ತಿಳಿಸಲಾಗಿದೆ. ಅದರಂತೆ, ದಿನಾಂಕ:06.04.2011ಕ್ಕೆ ಯಾವುದೇ ಸೇವಾಭಂಗವಿಲ್ಲದೆ ಐದು ವರ್ಷಗಳಿಗೆ ಕಡಿಮೆ ಇಲ್ಲದಂತೆ ನಿರಂತರವಾಗಿ ಕರ್ತವ್ಯ ನಿರ್ವಹಿಸಿದವರನ್ನು ಮಾತ್ರ ವಿಲೀನಕ್ಕೆ ಪರಿಗಣಿಸಲಾಗಿದೆ.<br>ಜೆ.ಓ.ಸಿ. ವಿಲೀನ ವಿಧೇಯಕ ದಿನಾಂಕ:06.04.2011ರ ಅಧಿಸೂಚನೆ ಸಂಖ್ಯೆ: |

| | | |
|---|---|---|
| | | ಸಂವ್ಯಶಾಇ 22 ಶಾಸನ 2011ರಲ್ಲಿನ ನಿಯಮ 6(1)ರಲ್ಲಿ ಈ ಅಧಿನಿಯಮ ಆರಂಭವಾದ ದಿನಾಂಕದಂದು ಐದು ವರ್ಷಗಳ ಸೇವೆಯನ್ನು ಪೂರ್ಣಗೊಳಿಸದ ಅರೆಕಾಲಿಕ ವೃತ್ತಿ ಶಿಕ್ಷಣ ಆಧಾರಿತ ಕೋರ್ಸುಗಳ ನೌಕರರನ್ನು ಯಾವುದೇ ಸರ್ಕಾರಿ ಸೇವೆಯಲ್ಲಿ ಅಥವಾ ಯಾವುದೇ ಖಾಸಗಿ ಅನುದಾನಿತ ಸಂಸ್ಥೆಯಲ್ಲಿ ಮುಂದುವರೆಸತಕ್ಕದ್ದಲ್ಲ ಅಥವಾ ವಿಲೀನಗೊಳಿಸತಕ್ಕದ್ದಲ್ಲ ಎಂದು ತಿಳಿಸಲಾಗಿದೆ. ಆದ್ದರಿಂದ, ದಿನಾಂಕ:06.04.2011ಕ್ಕೆ ನಿರಂತರವಾಗಿ ಐದು ವರ್ಷ ಪೂರೈಸದ ಜೆ.ಓ.ಸಿ ಬೋಧಕ ಮತ್ತು ಬೋಧಕೇತರರನ್ನು ವಿಲೀನಕ್ಕೆ ಪರಿಗಣಿಸಲು ಅವಕಾಶವಿರುವುದಿಲ್ಲ. ಈಗಾಗಲೇ ಸದರಿಯವರುಗಳನ್ನು ಕರ್ತವ್ಯದಿಂದ ಬಿಡುಗಡೆಗೊಳಿಸಲಾಗಿದೆ.<br>ಮಾನ್ಯ ಸುಪ್ರೀಂಕೋರ್ಟ್ ನ್ಯಾಯಾಲಯದ ಅಪೀಲು (ಸಿವಿಲ್) 3595-3612/1999 ದಿನಾಂಕ:10.04.2006ರ ರಾಜ್ಯ ಸರ್ಕಾರ ಮತ್ತು ಇತರರು ವಿರುದ್ಧ ಉಮಾದೇವಿ ಮತ್ತು ಇತರರು ಪ್ರಕರಣದಲ್ಲಿ ಒಂದು ಬಾರಿ ಕ್ರಮವಾಗಿ ಕ್ರಮಬದ್ಧಗೊಳಿಸಲು ಅವಕಾಶ ನೀಡಿ ಆದೇಶಿಸಿದ್ದು, ಅಂತಹ ವಿಲೀನ/ಕ್ರಮಬದ್ಧಗೊಳಿಸುವಿಕೆಯ ನಿಯಮಗಳನ್ನು ಮತ್ತೊಮ್ಮೆ ಯಾವುದೇ ತಿದ್ದುಪಡಿ ಮಾಡಬಾರದೆಂದು ಸ್ಪಷ್ಟ ನಿರ್ದೇಶನ ನೀಡಿರುವುದರಿಂದ, ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ವಿಧೇಯಕ-2011ನ್ನು ಮತ್ತೆ ತಿದ್ದುಪಡಿ ಮಾಡಲು ಅವಕಾಶವಿರುವುದಿಲ್ಲ. |

| | | |
|---|---|---|
| ಉ) | ವಿಲೀನಗೊಂಡ ಸಿಬ್ಬಂದಿಗಳಿಗೆ ಖಾಯಂ ಪೂರ್ಣ ಸೇವೆಯನ್ನು ಪರಿಗಣಿಸಿ ನಿಶ್ಚಿತ ಪಿಂಚಣಿ ನೀಡಲು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಕರ್ನಾಟಕ ರಾಜ್ಯದಲ್ಲಿನ ಪದವಿ ಪೂರ್ವ ಶಿಕ್ಷಣದಲ್ಲಿರುವ ವೃತ್ತಿ ಆಧಾರಿತ ಕೋರ್ಸುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರುಗಳನ್ನು ವಿಲೀನಗೊಳಿಸುವ ಅಧಿನಿಯಮ ಸಂಖ್ಯೆ:ಸಂವ್ಯಶಾಇ 22 ಶಾಸನ 2011, ದಿನಾಂಕ:06.04.2011 ರಂದು ಜಾರಿಗೆ ಬಂದಿದ್ದು, ಈ ವಿಧೇಯಕದಲ್ಲಿ ವಿಧಿಸಿರುವ ಷರತ್ತುಗಳ ಆಧಾರದ ಮೇಲೆ ವೃತ್ತಿ ಶಿಕ್ಷಣ ಇಲಾಖೆಯಲ್ಲಿ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಉಪನ್ಯಾಸಕರನ್ನು ವಿಲೀನ ವಿಧೇಯಕದನ್ವಯ ದಿನಾಂಕ:06.04.2011ಕ್ಕೆ ನಿರಂತರವಾಗಿ 05 ವರ್ಷಗಳ ಸೇವೆ ಸಲ್ಲಿಸಿರುವ ನೌಕರರುಗಳನ್ನು ವಿವಿಧ ಇಲಾಖೆಗಳಲ್ಲಿ ವಿಲೀನಗೊಳಿಸಲಾಗಿದೆ. ವಿಲೀನಗೊಂಡ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರನು ಕರ್ತವ್ಯಕ್ಕೆ ಹಾಜರಾದ ನಂತರ, ಈ ಅಧಿನಿಯಮದ ಅಡಿಯಲ್ಲಿ ಆತನ ಪ್ರಾರಂಭಿಕ ಮೂಲ ವೇತನವನ್ನು, ಆತನು ವಿಲೀನಗೊಂಡ ಹುದ್ದೆಯ ಪ್ರವರ್ಗದ ಕಾಲಿಕ ವೇತನ ಶ್ರೇಣಿಯ ಕನಿಷ್ಠಕ್ಕೆ ನಿಗಧಿಗೂಳಿಸತಕ್ಕದ್ದು ಹಾಗೂ ತನ್ನ ವಿಲೀನಕ್ಕೆ ಮೊದಲು ಸಲ್ಲಿಸಿದ ಸೇವೆಯನ್ನು ವೇತನ, ಜೇಷ್ಠತೆ ಹಾಗೂ ರಜೆ ಅಥವಾ ಪಿಂಚಣಿಗೆ ಸಂಬಂಧಿಸಿದಂತೆ ಲೆಕ್ಕಕ್ಕೆ ತೆಗದುಕೊಳ್ಳತಕ್ಕದಲ್ಲ ಎಂಬ ಷರತ್ತು ವಿಧಿಸಲಾಗಿದೆ. ಅಲ್ಲದೆ, ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರುಗಳನ್ನು ವಿಲೀನಗೊಳಿಸುವ ಅಧಿನಿಯಮ 2011ರ ನಿಯಮ-3ರಲ್ಲಿ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರುಗಳನ್ನು ಒಂದು ಸಲದ ಕ್ರಮವಾಗಿ ವಿಲೀನಗೊಳಿಸಲು ಪರಿಗಣಿಸಲಾಗಿದೆ. |

| | | |
|---|---|---|
| | | ಈ ಮೇಲಿನಂತೆ ಉಲ್ಲೇಖಿಸಲಾದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ದಿನಾಂಕ: 10.04.2006ರ ಆದೇಶದಂತೆ ಕರ್ನಾಟಕ ಅರೆಕಾಲಿಕ ವೃತ್ತಿ ಆಧಾರಿತ ಕೋರ್ಸುಗಳ ನೌಕರರನ್ನು ವಿಲೀನಗೊಳಿಸುವ ವಿಧೇಯಕ-2011ನ್ನು ಪುನಃ ತೆರೆಯಲು ಮತ್ತು ತಿದ್ದುಪಡಿ ಮಾಡಿ ಅವರ ಖಾಯಂ ಪೂರ್ವ ಸೇವೆಯನ್ನು ಪರಿಗಣಿಸಿ, ನಿಶ್ಚಿತ ಪಿಂಚಣಿ ನೀಡಲು ಹಾಗೂ ಅವರ ಹಿಂದಿನ ಅರ್ಹತೆಯನ್ನು ಪರಿಗಣಿಸಲು ಅವಕಾಶವಿರುವುದಿಲ್ಲ. |

**ಸಂಖ್ಯೆ: ಇಪಿ 07 ಟಿವಿಇ 2022**

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು